# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 4ನೇ ಸಂಚಿಕೆ ಕೊಪ್ಪ 13-9-1987 ಭಾನುವಾರ ಬೆಲೆ 50 ಪೈಸೆ


ಹಂದಿ ಸಾಕಣೆ ಕೇಂದ್ರ : ದಲಿತರ ಸಾಂಕೇತಿಕ ಮುಷ್ಕರ;

## ಸೆ. 15 ರಿಂದ ಅನಿರ್ದಿಷ್ಟಾವಧಿ ಚಳುವಳಿ

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ: ನೆಮ್ಮಾರಿನ ಸುಧಾರಿತ ತಳಿ ಹಂದಿ ಸಾಕಣೆ ಘಟಕದಲ್ಲಿ ನಡೆದಿರುವ ಅವ್ಯವಹಾರಗಳ ಕೂಲಂಕಷವಾದ ತನಿಖೆ ನಡೆಸಿ ತಪ್ಪಿತಸ್ಥರನ್ನು ಶಿಕ್ಷಿಸಬೇಕು ಮತ್ತು ಘಟಕವನ್ನು ಪುನಶ್ಚೇತನಗೊಳಿಸಬೇಕು ಎಂದು ಒತ್ತಾಯಿಸಿ ಸೆ. 7ರಂದು ಶೃಂಗೇರಿ ತಾ॥ ದಲಿತ ಸಂಘರ್ಷ ಸಮಿತಿಯ ನೇತೃತ್ವದಲ್ಲಿ ಸಾಂಕೇತಿಕ ಮುಷ್ಕರ ನಡೆಸಿದ ದಲಿತರು, ಸೆ. 15ರಿಂದ ನ್ಯಾಯ ದೊರೆಯುವವರೆಗೂ ಚಳುವಳಿ ತೀವ್ರಗೊಳಿಸಲು ನಿರ್ಧರಿಸಿದ್ದಾರೆ.

ನೆಮ್ಮಾರು ಚಿ ಕೊ. ಗ್ರಾಮೀಣ ಬ್ಯಾಂಕ್ ಶಾಖೆಯೆದುರು ವ್ಯವಹಾರದ ಅವಧಿಯ ಪೂರ್ತಿ ದಲಿತರು ಹೋರಾಟದ ಹಾಡುಗಳು ಮತ್ತು ಭಾಷಣಗಳೊಂದಿಗೆ ಧರಣಿ ಸತ್ಯಾಗ್ರಹ ನಡೆಸಿದರು. ಇದಕ್ಕೆ ಮೊದಲು ಅವರು ಊರಿನಲ್ಲಿ ಪ್ರತಿಭಟನಾ ಮೆರವಣಿಗೆ ನಡೆಸಿದರು.

ಈ ಘಟಕದ ಬಗ್ಗೆ ನಡೆದ ಅನ್ಯಾಯಗಳನ್ನು ಪಟ್ಟಿ ಮಾಡಿದ ದ.ಸಂ.ಸ. ಸಂಚಾಲಕ ಕೆ.ಎಂ. ಗೋಪಾಲ್ ತನಿಖೆಯಾಗಬೇಕಾಗಿರುವ ಅಂಶಗಳನ್ನು ವಿವರಿಸಿ ಮಾತನಾಡಿದರು. ಘಟಕ ಆರಂಭವಾದಾಗಿನ (ಅಂದರೆ ಕಟ್ಟಡ, ಮರಿಗಳು ಹಾಗೂ ಆರಂಭದ ಆಹಾರ ಸಾಮಗ್ರಿಗಳ) ಖರ್ಚು ಸುಮಾರು 57 ಸಾವಿರ ರೂ. ಹೊರತು, ಅನಂತರ ಮ್ಯಾನೇಜರ್ ವಹಿವಾಟು ನೋಡಿಕೊಂಡ ಅವಧಿಯ ಯಾವುದೇ ಖರ್ಚನ್ನೂ (ಸುಮಾರು 48 ಸಾವಿರ ರೂ.) ತಾವು ಒಪ್ಪಲು ಸಿದ್ಧರಿಲ್ಲವೆಂದೂ ಈ ಖರ್ಚಿನ ಬಗ್ಗೆ ಪೂರ್ಣ ತನಿಖೆಯಾಗಬೇಕೆಂದೂ ಅವರು ಒತ್ತಾಯಿಸಿದರು.

ಸೆ. 15ರೊಳಗೆ ಸಂಬಂಧಪಟ್ಟವರಿಂದ ಜವಾಬ್ದಾರಿಯುತವಾದ ಹೇಳಿಕೆ ಬರದಿದ್ದರೆ ಚಳುವಳಿಯನ್ನು ತೀವ್ರಗೊಳಿಸಿ, ನ್ಯಾಯ ದೊರೆಯುವವರೆಗೂ ಮುಂದುವರಿಸಲು ನಿರ್ಧರಿಸಲಾಯಿತು.

ನೆಮ್ಮಾರು ಮತ್ತು ಸುತ್ತಮುತ್ತಲ ವಸತಿಗಳ ಎಲ್ಲಾ ದಲಿತರು ಚಳುವಳಿಯಲ್ಲಿ ಪಾಲ್ಗೊಂಡಿದ್ದರು.

# ಕಿಗ್ಗ ಮಂಡಲ ಪ್ರಧಾನ ಪಟ್ಟ: ಒಡಂಬಡಿಕೆ ?

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಈ ತಾಲ್ಲೂಕಿನ ಕಿಗ್ಗ ಮಂಡಲದ ಪ್ರಧಾನರ ಹುದ್ದೆಯ ಸಂಬಂಧ ಉಂಟಾಗಿದ್ದ ಹಗರಣಕ್ಕೆ ತೆರೆ ಎಳೆಯುವ ಪ್ರಯತ್ನವೊಂದು 'ಪಂಚಾತಿಕೆ'ಯ ರೂಪದಲ್ಲಿ ಈಚೆಗೆ ನಡೆದಿರುವುದಾಗಿ ತಿಳಿದು ಬಂದಿದೆ.

ಮಂಡಲ ಪ್ರಧಾನರ ಚುನಾವಣೆ ನಡೆಯುವಾಗ ಅಲ್ಲಿ ಕಾಂಗ್ರೆಗೆ 13 ಮತ್ತು ಜನತಾಕ್ಕೆ ನಾಮಕರಣ ಸದಸ್ಯರೂ ಸೇರಿ 7 ಸ್ಥಾನಗಳಿದ್ದು, ಪ್ರಧಾನ ಹುದ್ದೆಗೆ ಕಾಂಗ್ರೆಸ್‌ನ ಅಧಿಕೃತ ಅಭ್ಯರ್ಥಿ ಹುಲ್ಸೆ ಸುಬ್ಬಣ್ಣ ಅವರ ವಿರುದ್ಧ ಕೆ. ಟಿ. ಚಂದ್ರಹಾಸ ಗೌಡರು ಬಂಡಾಯ ಹೂಡಿ ಇನ್ನಿಬ್ಬರು ಕಾಂಗ್ರೆ ಸದಸ್ಯರ 'ಬೆಂಬಲ' ದೊರಕಿಸಿಕೊಂಡಾಗ ಜನತಾದವರೂ ಬೆಂಬಲ ಕೊಟ್ಟು ತಲಾ 10 ಸದಸ್ಯರ ಸಮಬಲ ಉಂಟಾಗಿ, ಲಾಟರಿ ಎತ್ತಿದಾಗ ಚಂದ್ರಹಾಸ ಗೌಡರು ಗೆದ್ದು, ಅನಂತರ ಜನತಾಕ್ಕೆ ಸೇರಿಕೊಂಡಿದ್ದನ್ನು ಇಲ್ಲಿ ಸ್ಮರಿಸಬಹುದು.

**ಪಂಚಾತಿಕೆ : 'ಫಿಫ್ಟಿ-ಫಿಫ್ಟಿ'**

ಚಂದ್ರಹಾಸ ಗೌಡ ಮತ್ತು ಸುಬ್ಬಣ್ಣ ಇಬ್ಬರೂ ತಲಾ ಎರಡೂವರೆ ವರ್ಷ ಅಧಿಕಾರ ವಹಿಸಬೇಕು; ಚಂದ್ರಹಾಸ ಗೌಡರು ಪುನಃ ಕಾಂಗ್ರೆಸಿಗರಾಗಿಯೇ ಮುಂದುವರಿಯಬೇಕು- ಎಂಬುದು ಪಂಚಾತಿಕೆಯ ಸೂತ್ರವಾಗಿದ್ದು, ಎರಡೂವರೆ ವರ್ಷದ ನಂತರ ಸುಬ್ಬಣ್ಣ ಅವರಿಗೆ ಹುದ್ದೆ ಬಿಟ್ಟುಕೊಡಲು ಗೌಡರು ಒಪ್ಪಿದ್ದಾರೆಂದು ತಿಳಿದು ಬಂದಿದೆ.

**"ಪಕ್ಷ ಅಲ್ಲ, ಕೆಲಸ ಮುಖ್ಯ"**

ಈ ಒಡಂಬಡಿಕೆಯ ಬಗ್ಗೆ ಚಂದ್ರಹಾಸ ಗೌಡರನ್ನು ಪ್ರಶ್ನಿಸಿದಾಗ ಅವರ ಪ್ರತಿಕ್ರಿಯೆ ಹೀಗಿತ್ತು.

"ಚುನಾವಣೆಯ ಸಮಯದಿಂದಲೇ ತಾವೇ ಪ್ರಧಾನರೆಂದುಕೊಂಡು ಪ್ರಚಾರ ಮಾಡುತ್ತ ತಮ್ಮ ಅಧಿಕಾರ ದಾಹವನ್ನೂ ದರ್ಪವನ್ನೂ ತೋರಿಸುತ್ತ ಬಂದರು. ಆನಂತರವೂ ಸಹ ಕೂತು ಮಾತಾಡೋಣವೆಂದಗೂ ಕೇಳಲಿಲ್ಲ. ಆದ್ದರಿಂದ ಈ ನಿರ್ಣಯಕ್ಕೆ ನಾನೇನೂ ಒಪ್ಪಬೇಕಾದ್ದಿರಲಿಲ್ಲ

ಆದರೆ ವಿನಾಕಾರಣ ಎಲ್ಲಾ ಸಭೆಗಳಲ್ಲೂ ಗಲಾಟೆ, ಗೂಂಡಾಗಿರಿ ಮಾಡುತ್ತಾ, ಕೆಲಸ ಕಾರ್ಯಗಳಿಗೆ ಅಡ್ಡಿ ಮಾಡ್ತಿದ್ದಾರೆ. ನಾವೂ ಅದಕ್ಕೆ ಅದೇ ಉತ್ತರ ಕೊಡಬಹುದು. ಆದರೆ ನಮ್ಮ-ನಮ್ಮಲ್ಲಿನ ಅಧಿಕಾರ ಕಚ್ಚಾಟಕ್ಕಾಗಿ ನಿರಪರಾಧಿಗಳಿಗೆಲ್ಲ ಇನ್ನಿಲ್ಲದ ತೊಂದರೆಗಳು, ಕೇಸುಗಳು ಉಂಟಾಗಿ, ಗ್ರಾಮದ ಕೆಲಸ ಕಾರ್ಯಗಳಿಗೆ ಅಡ್ಡಿಯಾಗುತ್ತದೆ. ಆದ್ದರಿಂದ ಎರಡುವರೆ ವರ್ಷದ ನಂತರ ಅಧಿಕಾರ ಬಿಟ್ಟುಕೊಡಲು ಒಪ್ಪಿದ್ದೇನೆ. ಹಾಗೆಂತ ಅಗ್ರಿಮೆಂಟ್ ಏನೂ ಮಾಡಿಕೊಂಡಿಲ್ಲ, ಮಾತಾಡಿಕೊಂಡಿದ್ದೇವೆ ಅಷ್ಟೇ. ನೋಡೋಣ. ಈ ಎರಡುವರೆ

(4ನೇ ಪುಟಕ್ಕೆ)

ಕೊಪ್ಪ ಶಂಕರ್ ಕಂಪೆನಿಯಲ್ಲಿ

## 26 ಜನ ಹಂಗಾಮಿ ಕಾರ್ಮಿಕರ ಖಾಯಂ

ಕೊಪ್ಪ : ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆಯಲ್ಲಿ 26 ಜನ ಹಂಗಾಮಿ ಕಾರ್ಮಿಕರನ್ನು 1 9.87ರಿಂದ ಖಾಯಂ ಮಾಡಿ, 1.1-86ರಿಂದ ಕನಿಷ್ಠ ಕೂಲಿ ಕಾಯಿದೆಯನ್ವಯ ಅವರಿಗೆ ಸಲ್ಲಬೇಕಾದ ಸಂಬಳದ ಬಾಕಿಯನ್ನು ಕೊಡಲು ಕಂಪೆನಿ ಒಪ್ಪಿದ ಮೇರೆಗೆ, ಈ ಬಗ್ಗೆ ಕಾರ್ಮಿಕ ನ್ಯಾಯಾಲಯದಲ್ಲಿ ಹೂಡಿದ್ದ ಮೊಕದ್ದಮೆಯನ್ನು ಕಾರ್ಮಿಕರ ಸಂಘ ಹಿಂತೆಗೆದುಕೊಂಡಿದೆ.

ಸೆ 3ರಂದು ಚಿಕ್ಕಮಗಳೂರಿನ ಸಹಾಯಕ ಕಾರ್ಮಿಕ ಕಮಿಶನರ್ ಸಮ್ಮುಖದಲ್ಲಿ ಒಂದು ಒಡಂಬಡಿಕೆ ಏರ್ಪಟ್ಟಿದ್ದು, ಸಂಸ್ಥೆಯ ಈ 'ಕೊಡುಗೆ'ಗೆ ಪ್ರತಿಯಾಗಿ, ಕಾರ್ಮಿಕರು ಮೇಲ್ಕಂಡ ತಮ್ಮ ಬಾಕಿಯಲ್ಲಿ ಶೇ. 25ರಷ್ಟು ರಿಯಾಯ್ತಿ ನೀಡಿದ್ದಾರೆ.

ಹೀಗೆ ಖಾಯಂ ಆದವರಲ್ಲಿ ಒಂದೆರಡು ವರ್ಷದಿಂದ ಹಿಡಿದು 20ಕ್ಕೂ ಹೆಚ್ಚು ವರ್ಷಗಳಿಂದ 'ಹಂಗಾಮಿ'ಯಾಗಿ ದುಡಿಯುತ್ತಿದ್ದ ಕಾರ್ಮಿಕರೂ ಇದ್ದಾರೆಂದು ಕಾರ್ಮಿಕ ಮೂಲಗಳು ತಿಳಿಸಿವೆ.

ಅದೇ ದಿನ, ಹಿಂದೆ ಕಂಪೆನಿಯಲ್ಲಿ ಖಾಯಂ ಡ್ರೈವರ್ ಆಗಿದ್ದು ಸಸ್ಪೆಂಡ್ ಮಾಡಲ್ಪಟ್ಟಿದ್ದ ಚಂದ್ರಶೇಖರ್ ಬಗ್ಗೆ ಕೂಡ ಒಪ್ಪಂದವಾಗಿ, ಕೆಲಸ ತೊರೆಯಲು ಇಚ್ಛಿಸಿದ ಅವರಿಗೆ 2½ ತಿಂಗಳ ಸಂಬಳ ಮತ್ತು ಇತರ ಸೌಲತ್ತುಗಳನ್ನು ಕೊಡಲು ಕಂಪೆನಿ ಒಪ್ಪಿತು. (ಅವರೀಗ ಬೇರೆ ಕಡೆ ಕೆಲಸಕ್ಕೆ ಸೇರಿದ್ದಾರೆ.)

## ಒಂದು ಆತ್ಮಹತ್ಯೆ ಯತ್ನದ ಪ್ರತ್ಯಕ್ಷ ವರದಿ

ಕೊಪ್ಪದಲ್ಲಿ ಸೆ. 11ರ ರಾತ್ರಿ ಸುಮಾರು 10 ಗಂಟೆಯ ಸಮಯದಲ್ಲಿ ನವವಿವಾಹಿತ ಯುವಕನೊಬ್ಬ ತನ್ನ ಪತ್ನಿಯ ಅಕಾಲ ಮರಣದಿಂದ ಜಿಗುಪ್ಸೆಗೊಂಡು ಬಾಳಗಡಿ ಸರ್ಕಲ್ ಬಳಿಯ ಬಾವಿಗೆ ಹಾರಿ ಆತ್ಮಹತ್ಯೆಗೆ ಯತ್ನಿಸಿದ ನಿಮಿಷಾರ್ಧದಲ್ಲಿ ಸುತ್ತಮುತ್ತಲ ಜನರು, ಪೋಲೀಸರು, ವೈದ್ಯರುಗಳು ಮುಂತಾದವರೆಲ್ಲ ಬಾವಿಯ ಬಳಿ ಸೇರಿ ಆತನನ್ನು ಮೇಲೆತ್ತುವ ಯತ್ನದಲ್ಲಿ ತೊಡಗಿದರು.

ಆದರೆ ಸುತ್ತಮುತ್ತಲೆಲ್ಲೂ ಮೊದಲಿಗೆ ಒಂದು ಟಾರ್ಚ್ ಕೂಡ ಸಿಗಲಿಲ್ಲ. ನಂತರ ಒಂದು ಹಗ್ಗವಾಗಲಿ, ಬುಟ್ಟಿ, ಕುರ್ಚಿ, ಮುಂತಾದ ಯಾವುದೇ ಪರಿಕರವಾಗಲಿ ಒದಗಲಿಲ್ಲ. ಸರಿಯಾದ ಹಗ್ಗ ಸಿಗುವುದಕ್ಕೇ 20 ನಿಮಿಷ ಹಿಡಿಯಿತು. ಉಳಿದ ಪರಿಕರಗಳನ್ನೆಲ್ಲ ಎಲ್ಲೆಲ್ಲಿಂದಲೋ ಒದಗಿಸಿಕೊಳ್ಳುವ ವೇಳೆಗಾಗಲೇ ಆತ ಹಾರಿ ಸುಮಾರು 40 ನಿಮಿಷಗಳೇ ಕಳೆದಿದ್ದವು.

**ಬಾವಿಗಿಳಿವವರು ಯಾರು ?**

'ಈಗ ಬಾವಿಗಿಳಿಯಬಲ್ಲವರು ಯಾರೂ ಮುಂದೆ ಬರಲಿಲ್ಲ. ಹೇಳಿ, ಕೇಳಿ ಯಾರೂ ಉಪಯೋಗಿಸದಿದ್ದ ಬಾವಿ; ಭಾರೀ ಆಳವಿರುವುದು ಕಾಣುತ್ತಿದೆ. ನೀರೂ 'ಮಳೆಗಾಲ'ದ ಕೊನೆಯಾದ್ದರಿಂದ ಬಹಳ ಇರುವ ಹಾಗೆ ಕಾಣುತ್ತಿದೆ. ಅಲ್ಲದೆ ಆ ಸಂದರ್ಭದ ಆತಂಕದ ಒತ್ತಡವೊಂದು ಕಡೆ, ಆತನ ತಮ್ಮ-ತಂಗಿಯರ ಕರುಳು ಕತ್ತರಿಸುವ ರೋದನವೊಂದುಕಡೆ, ಯಾವ ಕೆಲಸ ಮಾಡಲಾರದಿದ್ದರೂ ಕೆಟ್ಟ ಕುತೂಹಲದ, ಸ್ವಲ್ಪವೂ ವಿವೇಚನೆಯಿಲ್ಲದ ಜನಗಳ ಹಿಂಡು ಬಾವಿ ಕಟ್ಟೆಯ ಮೇಲೆ ಮುಗಿ ಬಿದ್ದಿರುವುದೊಂದು ಕಡೆ.

**ಮೂರ್ತಿ ಚಿಕ್ಕದಾದರೂ ...**

ಅಂತೂ ಆಟೋ ಡ್ರೈವರ್ ಕಿಟ್ಟ ಎಂಬ, ಸಣ್ಣ ಗಾತ್ರದ ಯುವಕ ಮೊದಲು ಧೈರ್ಯ ಮಾಡಿ ಮುನ್ನುಗ್ಗಿದರು. ಅವರು ಬಾವಿಗಿಳಿದೊಡನೆ ಇನ್ನೊಬ್ಬ ಆಟೋ ಡ್ರೈವರ್ ಅಬ್ದುಲ್ ರಹಮಾನ್ ಯಾನೆ ಅದ್ದು ಎಂಬವರೂ ಬಾವಿಗಿಳಿದರು. ಅಂತೂ ಹೇಗೋ ಮಾಡಿ ಆ ಯುವಕನನ್ನು ಮೇಲೆತ್ತುವಾಗ ಆತ ಬಿದ್ದಲ್ಲಿಂದ ಒಂದು ಗಂಟೆಯೇ ಕಳೆದಿತ್ತು.

ಅದರಲ್ಲೂ ಆತ ಬಾವಿಗೆ ಹಾರಿದವನು ಮುಳುಗೇಳುತ್ತ, ಅಪ್ರಜ್ಞಾಪೂರ್ವಕವಾಗಿಯೋ ಏನೋ-ಒಂದು ಕಲ್ಲನ್ನು ಆಸರೆಯಾಗಿಸಿಕೊಂಡು ಮುಖವನ್ನು ಅರ್ಧಮರ್ಧ ನೀರಿನ ಹೊರಗಿಟ್ಟುಕೊಂಡಿದ್ದರಿಂದಾಗಿ ಮಾತ್ರ ಆವನನ್ನು ಬದುಕಿಸಲು ಸಾಧ್ಯವಾಯಿತಲ್ಲದೆ, ಸಕಾಲಿಕ ಕಾರ್ಯಾಚರಣೆಯಿಂದ ಖಂಡಿತಾ ಅಲ್ಲ. ಆದರೂ ಆಗಲೇ ಆತ ಅರೆಪ್ರಜ್ಞೆಯಲ್ಲೇ ನೀರು ಕುಡಿಯತೊಡಗಿದ್ದು, ಇನ್ನೇನು ಹೆಚ್ಚು ಹೊತ್ತು ಬೇಕಿರಲಿಲ್ಲ.

**ಇಳಿದವರನ್ನು ಮೇಲೆತ್ತಲೂ ಕಷ್ಟ**

ಇಷ್ಟಾಗುವಾಗ, ನೆಲದ ಮಟ್ಟದಿಂದ ನೀರಿನ ಮಟ್ಟದವರೆಗೆ ಅಂದಾಜು 50 ಅಡಿಗಿಂತಲೂ ಹೆಚ್ಚಿಗೆಯಿದ್ದ ಆ ಬಾವಿಯೊಳಗೆ ಇಳಿದಿದ್ದ ಈ ಇಬ್ಬರು ಹೃದಯವಂತ ಸಾಹಸಿಗರನ್ನು ಮೇಲೆತ್ತುವುದೂ ದೊಡ್ಡ ಕಷ್ಟಕ್ಕಿಟ್ಟುಕೊಂಡಿತು. ಹಗ್ಗ ಹಿಡಿದು ಮೇಲೆ ಹತ್ತಿ ಬರಲು ಯತ್ನಿಸಿದ ಅದ್ದು ಅರ್ಧದಲ್ಲಿ ಕೈ ಸೋತು ಪುನಃ ಕೆಳಕ್ಕೇ ಜಾರಿ ಹೋದರು. ಅವರ ಸೊಂಟಕ್ಕೆ ಹಗ್ಗ ಬಿಗಿದು ಕೊಟ್ಟು ಮೇಲೆಳೆದುಕೊಳ್ಳಲು ಹೇಳಿದರು ಕಿಟ್ಟ.

ಅನಂತರ ತಾನು ಮೇಲೆ ಬರುವಾಗ ವಿಪರೀತ ದಣಿವಿನಿಂದಾಗಿ ಅರ್ಧದಲ್ಲಿ ಕೈಯಿಂದ ಹಗ್ಗ ತಪ್ಪಿ ಬಾವಿಯೊಳಗೇ ಬಿದ್ದುಬಿಟ್ಟರು.

# ಪ್ರತಿಗಾಮಿ ಸ್ವಾಮೀಜಿ ದೇಶೋದ್ಧಾರ ಮಾಡುವರೆ ?

ತಮಿಳುನಾಡಿನ ಕಂಚಿ – ಕಾಮಕೋಟಿ ಮಠದ ಜಗದ್ಗುರು ಜಯೇಂದ್ರ ಸರಸ್ವತಿ ಎಂಬವರು ಈಚೆಗೆ ಪೀಠ ಬಿಟ್ಟು ಬಂದು ದೇಶೋದ್ಧಾರ, ಧರ್ಮದ ಉದ್ಧಾರಕ್ಕೆ ತಮ್ಮನ್ನು ಮೀಸಲಾಗಿಸುವುದಾಗಿ ಹೇಳಿಕೆಗಳನ್ನು ಕೊಡುತ್ತಾ ದೇಶಾದ್ಯಂತದ ಪತ್ರಿಕೆಗಳ ಮುಖ ಪುಟಗಳನ್ನು ಆವರಿಸಿದ್ದಾರೆ. ಉತ್ಸಾಹಿ 'ಧರ್ಮಾಭಿಮಾನಿ'ಗಳು, 'ದೇಶಾಭಿಮಾನಿ'ಗಳು ಇವರನ್ನು ಸ್ವಾಮಿ ವಿವೇಕಾನಂದರಿಗೆ ಹೋಲಿಸುವುದೇನು, ವಿವೇಕಾನಂದರ ಇನ್ನೊಂದು 'ಅವತಾರ'(!)ವೇ ಎಂದು ಘೋಷಿಸುವುದೇನು !. (ಸ್ವತಃ ವಿವೇಕಾನಂದರು 'ಅವತಾರ'ದ ಕಲ್ಪನೆಯನ್ನು ಒಪ್ಪದೆ ಅದನ್ನು ಕಟುವಾಗಿ ವಿರೋಧಿಸಿದ್ದರೆಂಬುದು ಬೇರೆ ಸಂಗತಿ—)

ಈ ಹಿನ್ನೆಲೆಯಲ್ಲಿ ಜಯೇಂದ್ರ ಸರಸ್ವತಿಗಳು ಹಾಗೂ ಅವರ ಹಿರಿಯ ಜಗದ್ಗುರುಗಳ ವಿಚಾರಧಾರೆ ಮತ್ತು ನಡವಳಿಕೆಗಳ ಬಗ್ಗೆ ಬೆಳಕು ಚೆಲ್ಲುವ ಒಂದು ಪತ್ರ ಇಲ್ಲಿದೆ. ಸೌಜನ್ಯ : 'ಆಂದೋಲನ', ಮೈಸೂರು.

(ಇದೇ ಹಿನ್ನೆಲೆಯಲ್ಲಿ, ಈ ದೇಶದ ಧರ್ಮ ಜನಜೀವನಗಳ ಬಗ್ಗೆ ಆಳವಾಗಿ ಚಿಂತಿಸಿ, ಸಮಾಜೋದ್ಧಾರಕ್ಕಾಗಿ ಜೀವನ ಪೂರ್ತಿ ಮುಡಿಪಾಗಿಟ್ಟ ಸ್ವಾಮಿ ವಿವೇಕಾನಂದರು ಧರ್ಮ, ವೇದಾಂತ, ಅದ್ವೈತಗಳ ಬಗ್ಗೆ ಹೇಳಿರುವ ಕೆಲವು ಮಾತುಗಳನ್ನೂ ಇಲ್ಲಿ ಸಂಗ್ರಹಿಸಿ ಕೊಟ್ಟಿದೆ. —ಸಂ )

ಮಾನ್ಯರೆ,

ಕಂಚಿ ಕಾಮಕೋಟಿ ಪೀಠದ ಸ್ವಾಮಿ ಜಯೇಂದ್ರ ಸರಸ್ವತಿ ಅವರು ಈಗ ತಲಕಾವೇರಿಯಲ್ಲಿ ಇದ್ದಾರೆ. ಅವರು ಮಠಕ್ಕೆ ವಾಪಸ್ಸಾಗದಿದ್ದರೆ ಕಂಚೀಪುರಂನಿಂದ ತಲಕಾವೇರಿಗೆ ಪಾದ ಯಾತ್ರೆ ಕೈಗೊಳ್ಳುವುದಾಗಿ 93 ವಯಸ್ಸಿನ ಪರಮಾಚಾರ್ಯರು (ಹಿರಿಯ ಗುರುಗಳು) ಮತ್ತು ಈಗ ಪೀಠಾರೋಹಣ ಮಾಡಿರುವ ವಿಜಯೇಂದ್ರ ಸ್ವಾಮಿಗಳು ಬೆದರಿಕೆ ಹಾಕಿದ್ದಾರೆ. (ಈ ಪತ್ರ ಪ್ರಕಟವಾದ ಕಾಲಕ್ಕೆ)

ಪತ್ರಿಕೆಗಳಲ್ಲಿ ಬಂದಿರುವ ವರದಿಗಳನ್ನು ನೋಡಿದರೆ ಏನೋ ಇರಬೇಕೆಂಬ ಗುಮಾನಿ ಉಂಟಾಗುವುದು ಸಹಜ, ಆದ್ದರಿಂದ ಅವರು ಪೀಠವನ್ನು 'ತ್ಯಾಗ' ಮಾಡಿದ್ದಾರೆಂದು ಹೇಳುವುದು ಸಮಂಜಸವಲ್ಲ.

ಇನ್ನು ಅವರು ಕಂಚಿಗೆ ಹೋಗುವುದಿಲ್ಲವೆಂಬ ಭಾವನೆ ಇತ್ತು. ಆದರೆ ಪರಮಾಚಾರ್ಯರು ಬೆದರಿಕೆ ಹಾಕಿದ ಮೇಲೆ, ಹೋಗುತ್ತೇನೆಂದು, ತಲಕಾವೇರಿಯಲ್ಲಿ ಇನ್ನೂ ಕೆಲ ಕಾಲ ಇರುತ್ತೇನೆಂದು ಹೇಳಿ ಈಗ ಕೊಲ್ಲೂರು ಮೂಕಾಂಬಿಕೆಯ ಕ್ಷೇತ್ರದಲ್ಲಿ ನೆಲೆಸುತ್ತೇನೆಂದು, ಮತ್ತೆ ಇಂದು ತಲಕಾವೇರಿಯಲ್ಲೇ ಇರುತ್ತೇನೆಂದು ಹೇಳಿರುವುದು ಅವರ ಚಿತ್ತಚಾಂಚಲ್ಯವನ್ನು ತೋರಿಸುತ್ತದೆ

ಇವರು ಯಾವ ಬಗೆಯ ವ್ಯಕ್ತಿ ಎಂದು ತಿಳಿಯುವುದು ಸೂಕ್ತ. ಪರಮಾಚಾರ್ಯರ ಮತ್ತು ಈ ಜಯೇಂದ್ರ ಸ್ವಾಮಿಗಳ ಭಾಷಣ ಮತ್ತು ಕೃತಿಗಳನ್ನು ಆಳವಾಗಿ ಅಧ್ಯಯನ ಮಾಡಿ ದ್ರಾವಿಡ ಕಳಗಂನ ಪ್ರಧಾನ ಕಾರ್ಯದರ್ಶಿ ಕೆ. ವೀರಮಣಿ 'ಕಂಚಿ ಶಂಕರಮಠ ರಹಸ್ಯಂಗಳ್' ಎಂಬ ಒಂದು ದೀರ್ಘ ಕೃತಿಯನ್ನು ತಮಿಳಿನಲ್ಲಿ ಬರೆದಿದ್ದಾರೆ. ಇದು ಅವರು ತಮಿಳುನಾಡಿನಲ್ಲಿ ಮಾಡಿದ ಭಾಷಣಗಳ ಸಂಕಲನ. ಅಂದರೆ ನೇರವಾಗಿ ಲಕ್ಷಾಂತರ ಜನರಿಗೆ ಅದರಲ್ಲಿನ ವಿಚಾರ ಮುಟ್ಟಿಸಿದ ಮೇಲೆ ಪ್ರಕಟವಾಗಿದೆ. ಇದನ್ನು 35–40 ಸಾವಿರ ಜನರು ಸೇರಿದ್ದ ಮಹಾಸಭೆಯಲ್ಲಿ (ದ್ರಾವಿಡ ಕಳಗಂನ ರಾಜ್ಯ ಮಟ್ಟದ ಸಮ್ಮೇಳನದಲ್ಲಿ) ಬಿಡುಗಡೆ ಮಾಡುವ ಅವಕಾಶ ನನಗೆ ದೊರೆತಿತ್ತು. ಆ ಸಂದರ್ಭದಲ್ಲಿ ಸಾವಿರಾರು ಪ್ರತಿಗಳು ಖರ್ಚಾದವು.

ಈ ಕೃತಿಯಲ್ಲಿ ವೀರಮಣಿಯವರು ಶಂಕರಾಚಾರ್ಯರ ವಿಚಾರಧಾರೆಯನ್ನು ವಿಮರ್ಶೆಗೆ ಗುರಿಪಡಿಸಿದ್ದಾರೆ. ಸ್ವಾಮೀಜಿ ಹೇಳುತ್ತಾರೆ: ಮೇಲು ಕೀಳು ಇರಬೇಕು; ಜಾತಿ ಆಧಾರಿತ ಧರ್ಮವೇ ನಿಜವಾದ ಧರ್ಮ; ಹೆಣ್ಣು ಗಂಡಿಗೆ ಸಮಾನಳಲ್ಲ, ಅವಳಿಗೆ ವಿದ್ಯಾಭ್ಯಾಸ ಕೊಡಕೂಡದು, ಹೆಣ್ಣು ಗಂಡಿಗೆ ಗುಲಾಮಳು; ದೇವದಾಸಿ ಪದ್ಧತಿ ಇರಬೇಕು; ಕಾನೂನಿನ ಮುಂದೆ ಎಲ್ಲರೂ ಸಮಾನರು ಎಂಬುದು ತಪ್ಪು; ಸಮಾನ ಅವಕಾಶಗಳಿರಬಾರದು; ಬಾಲ್ಯ ವಿವಾಹ ಇರಬೇಕು; ಸ್ಪೃಶ್ಯರು ಮತ್ತು ಅಸ್ಪೃಶ್ಯರು ಸಹಪಂಕ್ತಿಯಲ್ಲಿ ಊಟ ಮಾಡಬಾರದು; ಹಿಂದುಳಿದ ವರ್ಗಗಳ ಏಳಿಗೆಗೆ ವಿರೋಧ — ಇತ್ಯಾದಿ. ಇದಲ್ಲದೆ, ಸ್ವಾಮಿಗಳು, ವಿಪುಲವಾಗಿ ಲೈಂಗಿಕ ಕಥೆಗಳನ್ನು ಓದುವ ಚಾಳಿಯವರು.

ಇಂಥ ಆಲೋಚನೆ ಇರತಕ್ಕ ಸ್ವಾಮೀಜಿ ದೇಶೋದ್ಧಾರವನ್ನು ಹೇಗೆ ಮಾಡುತ್ತಾರೆಂದು ಜನರು ಗಂಭೀರವಾಗಿ ಪರಿಗಣಿಸಬೇಕು.

**—ಕೆ. ಎಸ್. ಭಗವಾನ್,**
ಸಾಹಿತಿ, ಇಂಗ್ಲೀಷ್ ರೀಡರ್,
ವಿಶ್ವವಿದ್ಯಾನಿಲಯ ಸಂಜೆ ಕಾಲೇಜು
ಮೈಸೂರು – 6

## ಪದ್ಯದಂಕಣ

### ಮುನಿಸೇತಕೆ ನಲ್ಲೆ

ಕೋಟಿ ಏಕೆ ನಿನ್ನ ಸುತ್ತ
ನಾ ಬರಲಾಗದ ಕಟ್ಟಳೆ
ಹೇಗೆ ಇರಲಿ ನಿನ್ನ ಬಿಟ್ಟು
ಬದುಕು ಕಗ್ಗತ್ತಲೆ
ಕಣ್ಣಿನಲ್ಲಿ ಕರೆದೆ ನೀನು ಓಡಿ ಬಂದೆ ನಾನು
ತಿರುಗಿ ನಡೆದೆ ಏಕೆ ? ಏನು ?
ಕೊಕ್ಕೆಯಲ್ಲಿ ಮೀನು.
ಮೊದಲೆ ನೀನು ಹೇಳಲಿಲ್ಲ–
ನಾನು ಕೂಡ ತಿಳಿಯಲಿಲ್ಲ
ಪ್ರೀತಿಯಲ್ಲಿ ವಿರಸ–ವಿರಹ
ಹೇಗೊ ಬಂದು ಸೇರಿತಲ್ಲ
ತಪ್ಪೊಂದು ಅರಿಯೆನಲ್ಲ
ಶಿಕ್ಷೆಯು ತರವಲ್ಲ.
ಎದೆಯ ಮೇಲೆ ಬರೆ ಎಳೆದು
ನಡೆದೆ ನೀನು ದೂರ
ನಡೆಯಬಲ್ಲೆ ಹೇಗೆ ನಾನು
ಬದುಕು ತುಂಬ ಭಾರ
ಬೇಡ – ಮರೆಯಬೇಡ ನನ್ನ—
ಕೇಳು ನನ್ನ ಜಾಣೆ
ನೀನಿಲ್ಲದ ನಾನು – ತಂತಿ ಕಡಿದ ವೀಣೆ.
ಒಮ್ಮೆ ನಿಂತು ನಕ್ಕುಬಿಡು
ಒಣಗಲಿ ಈ ವ್ಯಸನ
ಓಡಿ ಬಂದು ಕೂಡಿ ಬಿಡು
ಬಾಳಾಗಲಿ ತನನನ

**— ಎಚ್. ವಿ. ಶ್ರೀವತ್ಸ**

## ಧರ್ಮ-ವೇದಾಂತ-ಅದ್ವೈತ ಇತ್ಯಾದಿ ಕುರಿತು ಸ್ವಾಮಿ ವಿವೇಕಾನಂದರ ಕೆಲವು ವಿಚಾರಗಳು

ಧರ್ಮ ಬಾಯಿ ಮಾತಲ್ಲ, ನಂಬಿಕೆಯಲ್ಲ, ಸಿದ್ಧಾಂತವಲ್ಲ, ಅಥವಾ ಒಂದು ಕೋಮುವಾರು ಭಾವನೆಯೂ ಅಲ್ಲ. ಧರ್ಮ ಕೋಮುಗಳಲ್ಲೂ ಸಂಘಗಳಲ್ಲೂ ಜೀವಿಸಲಾರದು. ಯುಕ್ತಿಯ ಆಧಾರದ ಮೇಲೆ ಒಂದು **ಒಪ್ಪಿಗೆ** ಅಥವಾ **ವಿರೋಧವನ್ನು** ಸೂಚಿಸುವುದು, ತಮ್ಮ ಪುರೋಹಿತರು ಹೇಳುವ ಕೆಲವು ವಿಷಯಗಳನ್ನು ನಂಬುವುದು, ತಮ್ಮ ಜನಾಂಗವೇ ನಂಬಿಕೊಂಡಿರುವ ಕೆಲವು ಭಾವನೆ ಮತ್ತು ಮೂಢನಂಬಿಕೆಗೆ ಸಂಪೂರ್ಣ ಒಪ್ಪಿಗೆಯನ್ನು ಕೊಡುವುದು—ಧರ್ಮ ಇದಲ್ಲ.

ಧರ್ಮ ದೇವಸ್ಥಾನ ಕಟ್ಟುವುದರಲ್ಲಿಲ್ಲ ಅಥವಾ ಸಾಮೂಹಿಕ ಪೂಜೆಗೆ ಹೋಗುವುದರಲ್ಲಿಯೂ ಇಲ್ಲ. **ಧರ್ಮವೆಂದರೆ ಸಾಕ್ಷಾತ್ಕಾರ.** ಒಂದು ಕಣದಷ್ಟು ಧರ್ಮಾನುಷ್ಠಾನ ಮಣ ಮಾತಿಗಿಂತ ಮತ್ತು ಒಣ ಹೆಮ್ಮೆಗಿಂತ ಮೇಲು.

ಪ್ರತಿಯೊಬ್ಬರೂ ಒಂದೇ ಧರ್ಮಕ್ಕೆ ಸೇರಿ ಒಂದೇ ಮಾರ್ಗವನ್ನು ಅನುಸರಿಸುವ ದುರ್ದಿನ ಪ್ರಪಂಚಕ್ಕೆ ಬಾರದಿರಲಿ. ಆಗ ಧರ್ಮ ಮತ್ತು ಆಧ್ಯಾತ್ಮಿಕ ಭಾವನೆ ನಾಶವಾಗುವುದು. ವೈವಿಧ್ಯವೇ ಜೀವನದ ರಹಸ್ಯ. ಭಿನ್ನ ಧರ್ಮಗಳು ಏಕವಾದ ಒಂದೇ ಧರ್ಮದ ಅನಂತ ರೂಪಗಳು. ಇದರಿಂದ ಪ್ರತಿಯೊಬ್ಬನೂ ತನಗೆ ಯಾವುದು ಉತ್ತಮ ಮಾರ್ಗವೋ ಅದನ್ನು ಅನುಸರಿಸ ಬಹುದು.

ಧರ್ಮ ಎಲ್ಲೋ ಕೆಲವು ಆರಿಸಿದ ವ್ಯಕ್ತಿಗಳ ಕೈಯಲ್ಲಿ ಅಥವಾ ಕೆಲವು ಪುರೋಹಿತರ ಕೈಯಲ್ಲಿ ಇರುವವರೆಗೂ ಅದು ಕೇವಲ ದೇವಸ್ಥಾನ, ಚರ್ಚು, ಶಾಸ್ತ್ರ, ಮೂಢ ನಂಬಿಕೆ, ಆಚಾರ–ವ್ಯವಹಾರ ಇಷ್ಟರಲ್ಲಿಯೇ ಇರುತ್ತದೆ. ಆದರೆ ನಾವು ನಿಜವಾದ ಆಧ್ಯಾತ್ಮಿಕ ಸಮಷ್ಟಿ ಭಾವನೆಗೆ ಬಂದಾಗ ಮಾತ್ರ ಧರ್ಮ ಸತ್ಯವಾಗುತ್ತದೆ, ಬದುಕಿರುತ್ತದೆ.

ಸ್ವತಂತ್ರವಾಗಿ ಆಲೋಚಿಸುವವರನ್ನು ನಾನು ನಂಬುತ್ತೇನೆ. 'ಸದ್ಗುರು'ಗಳಿಂದ ಸಂಪೂರ್ಣವಾಗಿ ಮುಕ್ತರಾಗಬೇಕೆಂಬ ಮಾತನ್ನು ನಾನು ನಂಬುವೆ. ಅವರಿಗೆ ಗೌರವವೆಲ್ಲಾ ತೋರಿ– ಆದರೆ ಧರ್ಮವನ್ನು ಒಂದು ಸ್ವತಂತ್ರ ಆವಿಷ್ಕಾರವೆಂದು ಭಾವಿಸಿ.. ಬಲಿ, ಮಂತ್ರೋಚ್ಚಾರಣೆ, ಮುದ್ರೆ, ಆಚಾರಗಳು– ಇವು ಧರ್ಮವಲ್ಲ. ಉಪನಿಷತ್ತು ಎಲ್ಲಾ ಯಾಗ ಯಜ್ಞಗಳನ್ನು ಖಂಡಿಸುತ್ತದೆ, ಇವು ಕೆಲಸಕ್ಕೆ ಬಾರದವು ಎಂದು ಹೇಳುತ್ತದೆ.

* * *

ವೇದಾಂತ ವ್ಯಕ್ತಿಯನ್ನು ಬೋಧಿಸುವುದಿಲ್ಲ, ತತ್ವವನ್ನು ಬೋಧಿಸುತ್ತದೆ. ಇಡಿಯ ವಿಶ್ವಕ್ಕೆ ಒಬ್ಬ ಮಹಮ್ಮದ, ಕ್ರಿಸ್ತ ಅಥವಾ ಬುದ್ಧ ಒಂದು ಆದರ್ಶವೆಂದು ಹೇಗೆ ಒಪ್ಪಿಕೊಳ್ಳುವುದು? ಆ ಒಬ್ಬ ವ್ಯಕ್ತಿಯ ಪ್ರಮಾಣದ ಮೇಲೆ ಮಾತ್ರ ಎಲ್ಲಾ ನೀತಿ, ಧರ್ಮ, ಆಧ್ಯಾತ್ಮ ಹೇಗೆ ಇರಬಹುದು ? ವೇದಾಂತ ಧರ್ಮಕ್ಕೆ ಅಂತಹ ಯಾವ ವ್ಯಕ್ತಿಯ ಪ್ರಮಾಣವೂ ಅನಾವಶ್ಯಕ. ಪ್ರತಿಯೊಬ್ಬ ಮನುಷ್ಯನಲ್ಲಿರುವ ಸನಾತನ ಪ್ರಕೃತಿಯೇ ವೇದಾಂತಕ್ಕೆ ಪ್ರಮಾಣ.

ಜಾತಿ ಪದ್ಧತಿ ವೇದಾಂತಕ್ಕೆ ವಿರೋಧ. ಜಾತಿ ಕೇವಲ ಸಾಮಾಜಿಕ ಆಚಾರ. ಬುದ್ಧನಿಂದ ಹಿಡಿದು ಇಂದಿನವರೆಗೂ ನಮ್ಮ **ಮಹಾ ಗುರುಗಳೆಲ್ಲ** ಅದನ್ನು ನಾಶ ಮಾಡಲು ಯತ್ನಿಸಿರುವರು.

* * *

**ಅದ್ವೈತ** ಅಂದರೆ ಎಲ್ಲಾ ಮಾನವನನ್ನು ತನ್ನ ಆತ್ಮವೆಂದು ತಿಳಿದು ಅದರಂತೆ ಅನುಸರಿಸುವುದು. ಆದ್ದರಿಂದ ಧರ್ಮ ಮತ್ತು ತತ್ವದ ಕೊನೆಯ ಮಾತೇ ಅದ್ವೈತ. ಆ ಒಂದು ಮನಃ ಸ್ಥಿತಿಯಿಂದ ಮಾತ್ರ ಎಲ್ಲಾ ಧರ್ಮಗಳನ್ನು, ಪಂಗಡಗಳನ್ನು ಪ್ರೀತಿಯಿಂದ ನೋಡಬಹುದು.

ಹಿಂದೂಗಳು ಉಳಿದ ಜನಾಂಗಗಳಿಗಿಂತ ಬೇಗ ಅದನ್ನು ಕಂಡು ಹಿಡಿದರು ಎಂಬ ಕೀರ್ತಿಯನ್ನು ಹೊಂದಬಹುದು. ಆದರೆ ಎಲ್ಲಾ ಹಿಂದುಗಳಲ್ಲಿಯೂ ಅದು ಇನ್ನೂ ಅಭಿವೃದ್ಧಿಯಾಗಿಲ್ಲ.

ನನ್ನ ಅನುಭವವೇನೆಂದರೆ, **ಈ ಸಮತ್ವವನ್ನು**–ಅದರ ಗುಪ್ತ ಅರ್ಥ ಅಥವಾ ಅಂತರಂಗದ ನಿಯಮವನ್ನು ತಿಳಿಯದೆಯೂ–**ಸಾಧ್ಯವಾದಷ್ಟು** ಅನುಷ್ಠಾನ **ರೂಪದಲ್ಲಿ** ವ್ಯಕ್ತಪಡಿಸಿರುವುದು **ಇಸ್ಲಾಂ ಧರ್ಮ ಮಾತ್ರ.** ಹಿಂದೂಗಳು **ಈ ನಿಯಮವನ್ನು ಸ್ಪಷ್ಟವಾಗಿ ಅರಿತಿದ್ದರೂ ಕಾರ್ಯ ರೂಪಕ್ಕೆ ತಂದಿಲ್ಲ.**

ಆದ್ದರಿಂದ, ವೇದಾಂತ ತತ್ವಗಳು ಎಷ್ಟು ಸೂಕ್ಷ್ಮವಾಗಿ ಅಮೋಘವಾಗಿದ್ದರೂ ಸಹ, ಅನುಷ್ಠಾನದ ಇಸ್ಲಾಂ ಧರ್ಮದ ಸಹಾಯವಿಲ್ಲದೆ ಮಾನವ ವರ್ಗದ ಬಹು ಮಂದಿ

(3ನೇ ಪುಟಕ್ಕೆ

# ಡಿ.ವಿ.ಜಿ. ಶತಾಬ್ದಿ ಮತ್ತು ಪುಸ್ತಕ ಬಿಡುಗಡೆ

ಜಯಪುರ : ಇಲ್ಲಿಗೆ ಸಮೀಪದ ಹೇರೂರು ಗ್ರಾಮದ ವೀರಗಲ್ಲುಮಕ್ಕಿ ಕಿ. ಪ್ರಾ ಶಾಲೆಯಲ್ಲಿ ಹು. ವಾ. ಪ್ರಕಾಶನ ಮತ್ತು ಹವಿಸಂ (ಹಳೇ ವಿದ್ಯಾರ್ಥಿಗಳ ಸಂಘ) ಇವರ ಸಂಯುಕ್ತ ಆಶ್ರಯದಲ್ಲಿ ಡಿ.ವಿ.ಜಿ. ಜನ್ಮ ಶತಾಬ್ದಿಯ ಅಂಗವಾಗಿ ವಿವಿಧ ಕಾರ್ಯಕ್ರಮಗಳನ್ನು ಗಣೇಶೋತ್ಸವದ ಜೊತೆಗೇ ಏರ್ಪಡಿಸಲಾಗಿತ್ತು.

ಈ ಸಂದರ್ಭದಲ್ಲಿ ಎಚ್. ವಿ. ಮಹಾಬಲಯ್ಯ ಬರೆದ 'ಮಗಳಿಗೆ ಬರೆದ ಪತ್ರಗಳು' ಪುಸ್ತಕ ಬಿಡುಗಡೆ ಮಾಡಲಾಯಿತು. ಹುಲ್ಸೆ ವಾಸುದೇವಯ್ಯನವರು ಅಧ್ಯಕ್ಷತೆ ವಹಿಸಿದ್ದು, ಎಚ್. ಎಸ್. ಸೀತಾರಾಮಯ್ಯ ಮುಖ್ಯ ಅತಿಥಿಗಳಾಗಿದ್ದರು.

'ಭಾರತದ ಪ್ರಗತಿಯಲ್ಲಿ ಜನಸಂಖ್ಯೆಯ ಪಾತ್ರ' ಕುರಿತು ಎಚ್. ಪಿ. ಶಂಕರಪ್ಪ ಹಾಗೂ 'ದೇವರು'–ವಿಚಾರ ಲಹರಿ ಬಗ್ಗೆ ದೇವರಾಜ್‌ರವರು ವಿಶ್ಲೇಷಿಸಿ ಮಾತನಾಡಿದರು. ಶ್ರೀವತ್ಸ ಅವರು ಕಾರ್ಯಕ್ರಮದ ಬಗ್ಗೆ ಸಾಂದರ್ಭಿಕವಾಗಿ ಮಾತನಾಡಿದರು. ಕೊನೆಯಲ್ಲಿ ಹವಿಸಂ ಸದಸ್ಯರಿಂದ ವಿವಿಧ ಮನರಂಜನಾ ಕಾರ್ಯಕ್ರಮಗಳು ನಡೆದವು.

○ ಎಚ್. ವಿ. ಶ್ರೀವತ್ಸ




## ಉತ್ತಮ ಅಭಿನಯದ 'ತ್ಯಾಗಿ'

ನರಸಿಂಹರಾಜಪುರದ ಸಪ್ತಶ್ರೀ ಹವ್ಯಾಸಿ ರಂಗ ಸದಭಿರುಚಿಯ ನಾಟಕಗಳ ಉತ್ತಮ ಪ್ರಯೋಗಗಳನ್ನು ಕಲಾಸಕ್ತರಿಗೆ ನೀಡುತ್ತಿರುವುದು ಮಾತ್ರವಲ್ಲದೆ ಯುವಜನ ಮೇಳದಲ್ಲಿ ಮತ್ತು ವಿವಿಧ ಸ್ಪರ್ಧೆಗಳಲ್ಲಿ ರಾಜ್ಯಮಟ್ಟದವರೆಗೂ ಹಲವು ಪ್ರಶಸ್ತಿಗಳನ್ನು ಗಳಿಸಿದ್ದಾರೆ.

ಈಚೆಗೆ ಇಲ್ಲಿನ ಗಣಪತಿ ಉತ್ಸವದ ಸಂದರ್ಭದಲ್ಲಿ ಇವರು ಅಭಿನಯಿಸಿದ 'ತ್ಯಾಗಿ' ನಾಟಕ ಸೊಗಸಾಗಿತ್ತು. ತ್ಯಾಗಿಯ ಮುಖ್ಯ ಪಾತ್ರದಲ್ಲಿ ಸಪ್ತಶ್ರೀಯ ಅಧ್ಯಕ್ಷ ಎ. ರಘುಪತಿ ತುಂಗ ಮತ್ತು ಬ್ರೋಕರ್ ರಾಜು ಪಾತ್ರದಲ್ಲಿ ಚಂದ್ರಶೇಖರ್ ಉತ್ತಮ ಅಭಿನಯ ನೀಡಿದರು.

ಮಳೆಯಲ್ಲೇ ಜನರು ನಾಟಕವನ್ನು ವೀಕ್ಷಿಸಿದರೆಂಬುದು ಈ ಕಲಾವಿದರುಗಳ ಕಲಾ ವರಿತಿಕೆಗೊಂದು ಕನ್ನಡಿಯಾಗಿದೆ.

● ಎಸ್. ಎನ್. ಮಹಾಬಲರಾವ್, ನ. ರಾ. ಪುರ.

## ಓದುಗರ ಪತ್ರಗಳು

### “ಸಂಚಾರಿ ಪಶು ಚಿಕಿತ್ಸಾ ಘಟಕ ಬರುತ್ತಿಲ್ಲ”

ಮಾನ್ಯರೆ,

ಪಶು ವೈದ್ಯ ಇಲಾಖೆಯು ಸಂಚಾರಿ ಪಶು ಚಿಕಿತ್ಸಾ ಘಟಕವು ಪ್ರತಿವಾರ ಹಳ್ಳಿಗಳಿಗೆ ಬೇಟಿಕೊಡುವ ದಿನಾಂಕ, ವಾರ ಮತ್ತು ವೇಳೆಯನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿರುವುದು ಹಳ್ಳಿಯವರಿಗೆ ತುಂಬಾ ಅನುಕೂಲವಾಗಿದೆ.

ಅದರಂತೆ ನಮ್ಮ ಮೇಲುಬೆಳ್ರೆ ಗ್ರಾಮಕ್ಕೆ 'ಪ್ರತಿ ಬುಧವಾರ ಈ ಘಟಕ ಭೇಟಿ ಕೊಡಬೇಕಿತ್ತು. ಆದರೆ 19-8-87, 26-8-87 ಮತ್ತು 3-9-87 ಈ ಮೂರು ಬುಧವಾರಗಳಂದೂ ಘಟಕದವರು ಇಲ್ಲಿಗೆ ಬರಲಿಲ್ಲ. ಬಿಲಗದ್ದೆಯವರಿಗೆ ಅವರ ಕಾರ್ಯಕ್ರಮ ಪಟ್ಟಿಯಂತೆ ಬಂದು ಹೋಗಿದ್ದಾರೆಂದು ತಿಳಿಯಿತು. ಯಾರೋ ಕೇಳಿದ್ದಕ್ಕೆ ದಾರಿ ಸರಿಯಿಲ್ಲವೆಂಬ ಉತ್ತರ ಬಂದಿದೆಯಂತೆ.

ಇನ್ನು ಮುಂದಾದರೂ ಸಂಚಾರಿ ಪಶು ಚಿಕಿತ್ಸಾ ಘಟಕವು ಪ್ರತಿವಾರ ನಿಗದಿತ ದಿನಗಳಂದು ನಮ್ಮೂರಿಗೂ ಭೇಟಿ ಕೊಟ್ಟು ಜಾನುವಾರುಗಳಿಗೆ ಚಿಕಿತ್ಸೆ ಮಾಡಿ ಜನತೆಗೆ ಸಹಕರಿಸಬೇಕಾಗಿ ಮನವಿ.

ಗ್ರಾಮಸ್ಥರ ಪರವಾಗಿ,

—ಎಂ. ಎಸ್. ಮಂಜುನಾಥ್, ಮೇಲುಬೆಳ್ರೆ

### ಪಶು ವೈದ್ಯಾಧಿಕಾರಿಗಳ ಸ್ಪಷ್ಟೀಕರಣ

ಮೇಲುಬೆಳ್ರೆಯಿಂದ ಹರಿಹರಪುರದ ನಡುವಿನ ಮಾರ್ಗ ಹಾಳಾಗಿದ್ದು, ಮಳೆಗಾಲದಲ್ಲಿ ಆ ಮಾರ್ಗದಲ್ಲಿ ಸಂಚಾರಿ ಘಟಕದ ವಾಹನವನ್ನು ಓಡಿಸಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ಗ್ರಾಮಸ್ಥರು ರಸ್ತೆಯನ್ನು ಸ್ವಲ್ಪ ರಿಪೇರಿ ಮಾಡಿದರೆ (ಮುಖ್ಯವಾಗಿ ವಾಹನ ಹೂತು ಹೋಗುವ ಸ್ಥಳದಲ್ಲಿ) ಓಡಾಡಿಸಬಹುದು. ಇಲ್ಲವಾದರೆ ಆ ಗ್ರಾಮದವರಿಗೆ ಮಳೆಗಾಲದಲ್ಲಿ ಈ ಸೌಕರ್ಯ ಸಿಗುವಂತಿಲ್ಲ ಎಂದು ಕೊಪ್ಪದ ಪಶು ವೈದ್ಯಾಧಿಕಾರಿಗಳು ತಿಳಿಸಿದ್ದಾರೆ.

ಇದೇ ರೀತಿ ಹೊಕ್ಕಳಿಕೆ ಮತ್ತು ಬೊಮ್ಲಾಪುರದ ಮಧ್ಯೆ ಇರುವ ಹಳ್ಳಕ್ಕೆ ಸೇತುವೆ ಆಗಿಲ್ಲದಿರುವುದರಿಂದ ಬೊಮ್ಲಾಪುರ ಗ್ರಾಮದವರಿಗೆ ಕೂಡ ಮಳೆಗಾಲದಲ್ಲಿ ಈ ಸೌಕರ್ಯ ಒದಗಿಸಲು ಸಾಧ್ಯವಿಲ್ಲವಾಗಿದೆ ಎಂದೂ ಅವರು ತಿಳಿಸಿದ್ದಾರೆ. ●

### ವಿದ್ಯುತ್ ನಿಲುಗಡೆ ಬಗ್ಗೆ

ಮಾನ್ಯರೆ,

ಈ ವರ್ಷ ಮಳೆ ಸರಿಯಾಗಿ ಆಗದೆ, ವಿದ್ಯುತ್ ಉತ್ಪಾದಿಸುವ ಸ್ಥಾವರಗಳಿಗೆ ನೀರನ್ನು ಶೇಖರಿಸುವ ಅಣೆಕಟ್ಟುಗಳಿಗೆ ನೀರು ಸಾಕಷ್ಟು ಶೇಖರಿಸಲಾಗದೆ ಇರುವುದರಿಂದ ವಿದ್ಯುತ್ ಉತ್ಪಾದನೆಯು ಕುಂಠಿತಗೊಂಡು ಮತ್ತು ಬೇಡಿಕೆಯನ್ನು ಪೂರೈಸಲು ಆಗುತ್ತಿಲ್ಲ. ಆದುದರಿಂದ ಮಂಡಳಿಯ ಆದೇಶದಂತೆ ಕೊಪ್ಪ ಮತ್ತು ಬಾಳೆಹೊನ್ನೂರು ವಿದ್ಯುತ್ ವಿತರಣಾ ಕೇಂದ್ರದಿಂದ ಪೂರೈಸುವ ಕೊಪ್ಪ, ಶೃಂಗೇರಿ, ನರಸಿಂಹರಾಜಪುರ ತಾಲ್ಲೂಕಿನ ಎಲ್ಲಾ ಊರುಗಳಿಗೆ ಪ್ರತಿದಿವಸ ಬೆಳಿಗ್ಗೆ 6 ಗಂಟೆಯಿಂದ ಮಧ್ಯಾಹ್ನ 2 ಗಂಟೆಯವರೆಗೆ ವಿದ್ಯುತ್ ಸರಬರಾಜು ಇರುವುದಿಲ್ಲ.

ದಯವಿಟ್ಟು ಬಳಕೆದಾರರು ಇಲಾಖೆಯವರೊಂದಿಗೆ ಸಹಕರಿಸಬೇಕಾಗಿ ಕೋರುತ್ತೇನೆ

—ಸ. ಕಾ. ಇಂಜಿನೀಯರ್, ಕ. ವಿ ಮಂಡಳಿ, ಬಾಳೆಹೊನ್ನೂರು

### ಬಸ್ ವೇಳೆ ಮಾರ್ಪಾಡಾಗಲಿ

ಮಾನ್ಯರೆ,

ಶಂಕರ್ ಟ್ರಾನ್ಸ್‌ಪೋರ್ಟ್ ಬಸ್ ಕಳಸದಿಂದ ಇನ್ನು ಮುಂದೆ ಸಂಜೆ 5 ಘಂಟೆಗೆ ಹೊರಡುವುದೆಂದು ತಿಳಿದು ಬಂದಿದೆ. ಆದರೆ ಇದರಿಂದ ಶಾಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ, ವ್ಯಾಪಾರಸ್ಥರಿಗೆ ಮತ್ತು ರೈತಾಪಿ ವರ್ಗಕ್ಕೆ ತುಂಬಾ ತೊಂದರೆಯಾಗುವುದರಿಂದ ಈ ಹಿಂದೆ ಹಲವಾರು ವರ್ಷದಿಂದ ಓಡಾಡುತ್ತಿದ್ದಂತೆ ಶಂಕರ್ ಕಂಪೆನಿಯವರು ಸೂಕ್ತ ಮಾರ್ಪಾಡು ಮಾಡಬೇಕಾಗಿ ಕೋರುತ್ತೇವೆ

—ತೊಂದರೆಗೀಡಾದ ಪ್ರಯಾಣಿಕರು, ಗುಡ್ಡೇತೋಟ.

## ಪ್ರತಿಭೆ

### ಕಂಪ್ಯೂಟರ್ ಇಂ॥ನಲ್ಲಿ ಪ್ರಥಮ ರ್‍ಯಾಂಕ್ ಪಡೆದ ಜೆ. ಎ. ಲಕ್ಷ್ಮೀನಾರಾಯಣ

ಜಯಪುರದ ದುರ್ಗಾದೇವಸ್ಥಾನದ ಅರ್ಚಕ ಅನಂತಯ್ಯನವರ ಮಗನಾದ ಜೆ. ಎ. ಲಕ್ಷ್ಮೀನಾರಾಯಣ ಇವರು ಕರ್ನಾಟಕ ವಿಶ್ವವಿದ್ಯಾಲಯ 1987ರಲ್ಲಿ ನಡೆಸಿದ ಕಂಪ್ಯೂಟರ್ ಇಂಜಿನಿಯರಿಂಗ್ ಪದವಿ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿ ಬಾಗಲಕೋಟೆಯ ಇಂಜಿನಿಯರಿಂಗ್ ಕಾಲೇಜಿಗೆ ಕೀರ್ತಿ ತಂದಿದ್ದಾರೆ.

ಇದಕ್ಕೆ ಮೊದಲಿನ ಎರಡು ವರ್ಷವೂ ದ್ವಿತೀಯ ರ್‍ಯಾಂಕ್ ಗಳಿಸಿದ್ದ ಲಕ್ಷ್ಮೀನಾರಾಯಣ ಈಗ ಬಾಗಲಕೋಟೆಯ ಇಂಜಿನಿಯರಿಂಗ್ ಕಾಲೇಜಲ್ಲಿ ಉಪನ್ಯಾಸಕರಾಗಿದ್ದಾರೆ.

ಜಯಪುರ ಪ್ರೌಢಶಾಲೆಯ ಹಳೇ ವಿದ್ಯಾರ್ಥಿಯಾದ ಇವರು ಕಂಪ್ಯೂಟರ್ ವಿಜ್ಞಾನದಲ್ಲಿ ಹೆಚ್ಚಿನ ಸಂಶೋಧನೆ ಮಾಡುವ ಅಭಿಲಾಷೆ ಹೊಂದಿದ್ದಾರೆ.

○ ಶಂ. ನ. ಶೇಷಗಿರಿ, ಜಯಪುರ

## ಸ್ವಾಮಿ ವಿವೇಕಾನಂದರ ಕೆಲವು ವಿಚಾರಗಳು

(2ನೇ ಪುಟದಿಂದ)

ಪ್ರಯೋಜನವಿಲ್ಲವೆಂದು ನಾನು ನಂಬಿದ್ದೇನೆ. **ನಮ್ಮ ಮಾತೃ ಭೂಮಿಯಲ್ಲಿ ಹಿಂದೂ ಮತ್ತು ಮುಸಲ್ಮಾನ ಧರ್ಮಗಳೆರಡೂ ಮಿಲನವಾಗಬೇಕು. ವೇದಾಂತದ ಮಿದುಳು, ಇಸ್ಲಾಮಿನ ದೇಹ** (ಅಂದರೆ ತತ್ವ ಮತ್ತು ಅದರ ಅನುಷ್ಠಾನ—ಸಂ.) **—ಇದೊಂದೇ ನಮ್ಮ ಪುರೋಗಮನಕ್ಕೆ ಹಾದಿ.** ○

(ಸಹಾಯ : ಜ. ಹೊ. ನಾರಾಯಣ ಸ್ವಾಮಿಯವರು ಸಂಪಾದಿಸಿರುವ "ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು" ಎಂಬ ಪುಸ್ತಕದಿಂದ. —ಸಂ.)

[ವಿವೇಕಾನಂದರ ಬರಹ–ಬೋಧನೆಗಳಲ್ಲಿ, 'ಪುರೋಹಿತರು' ಎಂದರೆ ಯಾವುದೇ ಧರ್ಮದ ಧರ್ಮ ಬೋಧಕರು ಎಂಬರ್ಥದಲ್ಲಿ ಬಳಸಿದ್ದಾರೆ. ಅಂತೆಯೇ, 'ಸನಾತನ' ಎಂದರೆ ಮಾನವನ ಆದಿಯಿಂದ ಅನ್ವಯವಾಗುವಂಥದು. ಈಗ ಪ್ರಚಲಿತವಿರುವಂತೆ 'ಹಿಂದೂ' ಎಂಬ ಅರ್ಥವಲ್ಲ. —ಸಂ.]

## ಸಂಬಾರ ಮಂಡಳಿಯಿಂದ ರಿಯಾಯಾತಿ ದರದಲ್ಲಿ ಏಲಕ್ಕಿ ಗಿಡಗಳ ಮಾರಾಟ

ಕೊಪ್ಪ : ಈ ತಾಲ್ಲೂಕಿನ ನಾರ್ವೆ–ಬೆಳಗೊಳದಲ್ಲಿರುವ ಸಂಬಾರ ಮಂಡಳಿಯ ಸಸ್ಯ ಪಾಲನಾ ಕೇಂದ್ರದಲ್ಲಿ 10 ತಿಂಗಳಿನ ಮಲಬಾರ್ ಜಾತಿಯ 10,000 ಏಲಕ್ಕಿ ಗಿಡಗಳನ್ನು, ಗಿಡ ಒಂದಕ್ಕೆ ರೂ. 1ರಂತೆ ರಿಯಾಯಿತಿ ದರದಲ್ಲಿ ಮಾರಾಟ ಮಾಡಲಾಗುವುದು. ಆಸಕ್ತಿಯುಳ್ಳ ಬೆಳೆಗಾರರು ಬೆಳಗೊಳದಲ್ಲಿರುವ ಸಂಬಾರ ಮಂಡಳಿಯ ಸಸ್ಯ ಪಾಲನಾ ಅಧಿಕಾರಿಗಳನ್ನು ತಕ್ಷಣ ಸಂಪರ್ಕಿಸಬೇಕಾಗಿ ಕೋರಲಾಗಿದೆ.



ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಚಿಕ್ಕಮಗಳೂರು

## ಉದರ ದರ್ಶಕ ಶಸ್ತ್ರ ಚಿಕಿತ್ಸೆ

ಉದರ ದರ್ಶಕ ಶಸ್ತ್ರ ಚಿಕಿತ್ಸೆ ಅತಿ ಸುಲಭವಾದ ಮತ್ತು ಸರಳವಾದ ವಿಧಾನ ಮೂರು ನಾಲ್ಕು ನಿಮಿಷಗಳಲ್ಲಿ ಆಗುವಂತಹುದು. ಬೆಳಿಗ್ಗೆ ಆಸ್ಪತ್ರೆ ಅಥವಾ ಶಿಬಿರಕ್ಕೆ ಬಂದರೆ, ಸಂಜೆ ಮನೆಗೆ ಹಿಂತಿರುಗಬಹುದು. ಶಸ್ತ್ರ ಚಿಕಿತ್ಸೆಯನ್ನು ತರಬೇತಿ ಪಡೆದ ವೈದ್ಯರೇ ಮಾಡುತ್ತಾರೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳು, ತಾಲ್ಲೂಕು ಹಾಗೂ ಜಿಲ್ಲಾ ಆಸ್ಪತ್ರೆಗಳಲ್ಲದೆ, ಸ್ಥಳಾವಕಾಶ ಮತ್ತು ವಿದ್ಯುಚ್ಛಕ್ತಿ ಸೌಕರ್ಯವಿರುವ ಇತರೆ ಸ್ಥಳಗಳಲ್ಲೂ ಶಿಬಿರಗಳನ್ನು ಏರ್ಪಡಿಸಲಾಗುತ್ತಿದೆ. ಆಸ್ಪತ್ರೆಗಳಲ್ಲಿ ಒದಗಿಸುವ ಸೇವೆಯನ್ನೇ ಈ ಶಿಬಿರಗಳಲ್ಲಿ ಒದಗಿಸಲಾಗುತ್ತದೆ. ಮಹಿಳೆಯರು ತಮಗೆ ಹತ್ತಿರವಿರುವ ಆಸ್ಪತ್ರೆಗಳಲ್ಲಾಗಲಿ, ಶಿಬಿರಗಳಲ್ಲಾಗಲಿ ಈ ಶಸ್ತ್ರ ಚಿಕಿತ್ಸೆಯ ಪ್ರಯೋಜನವನ್ನು ಪಡೆಯಬಹುದು.

ಈ ಶಸ್ತ್ರ ಚಿಕಿತ್ಸೆಯ ಸ್ಥಳ ಮತ್ತು ಶಿಬಿರದ ದಿನಾಂಕಗಳನ್ನು ತಿಳಿಯಲು ನಿಮ್ಮ ಸಮೀಪವಿರುವ ಸರ್ಕಾರಿ ಆಸ್ಪತ್ರೆಯ ವೈದ್ಯರನ್ನಾಗಲಿ, ಆರೋಗ್ಯ ಇಲಾಖೆ ಸಿಬ್ಬಂದಿಯವರನ್ನಾಗಲಿ ಇಂದೇ ಭೇಟಿಮಾಡಿ

**ಡಾ॥ ಎಸ್. ಬಿ. ಹೆಂಡಿ**, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಚಿಕ್ಕಮಗಳೂರು.

## ಒಂದು ಆತ್ಮಹತ್ಯೆ ಯತ್ನ

(1ನೇ ಪುಟದಿಂದ)

ಪ್ರಾಣ ಭಯದಿಂದ ತತ್ತರಿಸಿದರೂ ಅಷ್ಟಿಷ್ಟು ನೀರು ಕುಡಿದು ಪುನಃ ಹೇಗೋ ನೀರ ಮೇಲೆ ಬಂದು, ಸೊಂಟಕ್ಕೂ ಹಗ್ಗ ಕಟ್ಟಿಕೊಂಡು ಕೈಯಲ್ಲೂ ಹಿಡಿದುಕೊಂಡರು. ಅನಂತರ ಪ್ರಯಾಸದಿಂದ ಅವರನ್ನು ಮೇಲೆ ಸೆಳೆದುಕೊಳ್ಳುವ ವೇಳೆಗೆ ಹೆಚ್ಚು ಕಮ್ಮಿ ಮತ್ತೆ ಅರ್ಧ ಗಂಟೆಯೇ ಕಳೆದಿತ್ತು.

ಮೂವರಿಗೂ ಆಸ್ಪತ್ರೆಯಲ್ಲಿ ತತ್ಕ್ಷಣ ಚಿಕಿತ್ಸೆ ನೀಡಲಾಯಿತು. ಆ ಯುವಕನೂ ಬಚಾವಾದನು.

**ಕಣ್ತೆರೆಸಬೇಕಾದ ಘಟನೆ**

ಈ ಘಟನೆ ಇಂಥ ಸಂದರ್ಭದಲ್ಲಿ ಎದುರಾಗುವ ಹಲವು ಸಮಸ್ಯೆಗಳ ಬಗ್ಗೆ ಸಂಬಂಧ ಪಟ್ಟವರು ಯೋಚಿಸಬೇಕಾದ ಅಗತ್ಯವನ್ನು ಮುಂದೊಡ್ಡಿದೆ. **ಮುಖ್ಯವಾಗಿ ಪೋಲೀಸ್ ಠಾಣೆಗಳಲ್ಲಿ ಇದಕ್ಕಾಗಿಯೇ ಸಮರ್ಪಕವಾದ ವ್ಯವಸ್ಥೆ-ಅಂದರೆ ಸಾಕಷ್ಟು ಉದ್ದವಾದ ಹಗ್ಗ, ಬುಟ್ಟಿ, ಇತ್ಯಾದಿ ಪರಿಕರಗಳ ಜೊತೆಗೆ, ನೀರಿಗೆ (ಹೊಳೆ, ಕೆರೆ, ಬಾವಿ ಇತ್ಯಾದಿ) ಬಿದ್ದವರನ್ನು ತಡವಿಲ್ಲದೆ ರಕ್ಷಿಸುವ ಕಾರ್ಯದಲ್ಲಿ ಯೋಗ್ಯ ತರಬೇತಿಯುಳ್ಳ ಕಾನ್‌ಸ್ಟೇಬಲ್‌ಗಳು ಪ್ರತಿ ಠಾಣೆಯಲ್ಲೂ ಕಡೇ ಪಕ್ಷ ಒಬ್ಬಿಬ್ಬರಾದರೂ ಇರಲೇ ಬೇಕು.** ಪೋಲೀಸ್ ವರಿಷ್ಠರು ಮನಸ್ಸು ಮಾಡಿದರೆ ಇದೇನೂ ಅಸಾಧ್ಯದ ಮಾತಲ್ಲ.

ಈ ಘಟನೆಯ ವೇಳೆ, ಬಾವಿಗೆ ಮುತ್ತಿಕೊಂಡು ಬೇರೆಯವರಿಗೆ ಕೆಲಸ ಮಾಡಲೂ ಅಡಚಣೆ ಮಾಡುತ್ತಿದ್ದ ಜನರನ್ನು ಪೋಲೀಸರು ಯಾವ ರೀತಿಯಲ್ಲೂ ನಿಯಂತ್ರಿಸಲು ಯತ್ನಿಸಲಿಲ್ಲ. ಸ್ಥಳದಲ್ಲಿ ಹಾಜರಿದ್ದುದೂ ಸಬ್‌ಇನ್‌ಸ್ಪೆಕ್ಟರ್ ಮತ್ತು ದಫೇದಾರ್ ಇಬ್ಬರೇ. ಅವರ ಗಮನ ಪೂರ್ತಿ ರಕ್ಷಣೆಯ ಕಾರ್ಯಾಚರಣೆಯತ್ತ ಇದ್ದುದು ಇದಕ್ಕೆ ಕಾರಣವಿರಬಹುದು. ಆದರೂ ಇದೂ ಕೂಡ ಇಲಾಖೆ ಗಮನಿಸಬೇಕಾದ ಒಂದು ಅಂಶವೇ.

ಬಹಳ ಇಕ್ಕಟ್ಟಿನ ಅಪಾಯದ ಪರಿಸ್ಥಿತಿಯಲ್ಲಿ ಅಪೂರ್ವ ಧೈರ್ಯ ಪ್ರದರ್ಶಿಸಿದ ಕಿಟ್ಟ ಮತ್ತು ಅದ್ದು ಇವರನ್ನು ಎಷ್ಟು ಹೊಗಳಿದರೂ ಕಡಿಮೆಯೇ.

—ಸಂಪಾದಕ

## ಅಗಳಗಂಡಿ ಮಂಡಲ ಪಂಚಾಯ್ತಿಗೆ ಜಿ. ಪ. ಅಧ್ಯಕ್ಷರ ಭೇಟಿ

ಅಗಳಗಂಡಿ : ಇಲ್ಲಿನ ಪ್ರೌಢಶಾಲಾ ಕಟ್ಟಡದ ಉದ್ಘಾಟನೆಗೆ ಬಂದಿದ್ದ ಜಿಲ್ಲಾ ಪರಿಷತ್ ಅಧ್ಯಕ್ಷ ಕೆ. ಎಂ. ಕೃಷ್ಣಮೂರ್ತಿ ಮಂಡಲ ಪಂಚಾಯ್ತಿಗೆ ಭೇಟಿ ಕೊಟ್ಟದ್ದರು. ಮಂಡಲ ಪ್ರಧಾನ ಕೆ. ಸಿ. ಸತೀಶ್ ಅವರಿಗೆ ಮನವಿ ಪತ್ರ ಸಲ್ಲಿಸಿದರು. ಉಪ ಪ್ರಧಾನ ಎಚ್. ಎಸ್. ರಂಗಣ್ಣ ಸ್ವಾಗತಿಸಿ ವಂದಿಸಿದರು.

(ವರದಿ : ಎಂ. ವಿ ಗಂಗಾಧರ್)

## ಗಾಂಧೀ ಜಯಂತಿ ಪ್ರಯುಕ್ತ 4 ತಾ॥ಗಳ ಸೈಕಲ್ ಪಂದ್ಯ

ಕೊಪ್ಪದಲ್ಲಿ ನೂತನವಾಗಿ ಪ್ರಾರಂಭವಾಗಿರುವ "ಮಾರುತಿ ಸ್ಪೋರ್ಟ್ಸ್ ಕ್ಲಬ್" ಇದರ ವತಿಯಿಂದ ಗಾಂಧೀ ಜಯಂತಿ ಪ್ರಯುಕ್ತ ತೀರ್ಥಹಳ್ಳಿ, ಕೊಪ್ಪ, ನ. ರಾ. ಪುರ, ಶೃಂಗೇರಿ ತಾಲ್ಲೂಕು ಮಟ್ಟದ ಸೈಕಲ್ ರೇಸ್ ಇದೇ ಅಕ್ಟೋಬರ್ 2 ರಂದು ಜರುಗಲಿದೆ. ಭಾಗವಹಿಸುವ ಸ್ಪರ್ಧಿಗಳು ರೂ. 10/- ನ್ನು ಪ್ರವೇಶ ಶುಲ್ಕವಾಗಿ ಈ ಕೆಳಕಂಡ ವಿಳಾಸಕ್ಕೆ ತಲುಪಿಸಿ, ತಮ್ಮ ಹೆಸರನ್ನು ನೋಂದಾಯಿಸಬೇಕಾಗಿ ವಿನಂತಿ. ಹೆಚ್ಚಿನ ವಿವರಗಳಿಗೆ ಈ ವಿಳಾಸಕ್ಕೆ ಸಂಪರ್ಕಿಸಬಹುದು.

ಎಸ್. ಜಲಂಧರ್, ಕೇರಾಫ್ ತಾಲ್ಲೂಕು ಯುವಜನ ಕೇಂದ್ರ, ಹಳೇ ಆಸ್ಪತ್ರೆ ಕಟ್ಟಡ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ

## "ಅಂಚೆ ವ್ಯವಸ್ಥೆ ಸರಿಪಡಿಸಿ"

ಶಾಂತಿ ಗ್ರಾಮ : ಇಲ್ಲಿಗೆ ಬರುವ ಅಂಚೆಯ ಚೀಲ ಕೊಪ್ಪದಿಂದ ಬಸರಿಕಟ್ಟೆಗೆ ಹೋಗಿ ಅಲ್ಲಿ ವಿಂಗಡಣೆಯಾಗಿ ಪುನಃ ಹಿಂದಕ್ಕೆ ಇನ್ನೊಂದು ಬಸ್ಸಿನಲ್ಲಿ ಬರಬೇಕಾಗಿದೆ ಯಾದ್ದರಿಂದ ಶಾಂತಿಗ್ರಾಮದಲ್ಲಿ ಅಂಚೆ ಪತ್ರಗಳ ಬಟವಾಡೆ ವಿಪರೀತ ತಡವಾಗುತ್ತಿದ್ದು, ಇದನ್ನು ಮಾರ್ಪಾಡು ಮಾಡಬೇಕೆಂದು ಕರಿಮನೆ ಭೂಬ್ಯಾಂಕ್ ಅಧ್ಯಕ್ಷ ಚಂದ್ರಶೇಖರ್ ಅಂಚೆ ಸೂಪರಿಂಟೆಂಡೆಂಟರನ್ನು ಒತ್ತಾಯಿಸಿದ್ದಾರೆ.

## ಸ್ವೋದ್ಯೋಗ ಯೋಜನೆ ಅರ್ಜಿ ಸಲ್ಲಿಸಲು ಪ.ಜಾತಿ/ವರ್ಗದ ಅಭ್ಯರ್ಥಿಗಳಿಗೆ ಅವಧಿ ವಿಸ್ತರಣೆ

ಕೊಪ್ಪ : 1987–88ರ ಸ್ವಯಂ ಉದ್ಯೋಗ ಯೋಜನೆಯನ್ವಯ ಸಾಲ-ಸೌಲಭ್ಯಕ್ಕಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕವನ್ನು **ಪ. ಜಾತಿ/ವರ್ಗಗಳ ಅಭ್ಯರ್ಥಿಗಳಿಗೆ ಮಾತ್ರ 19.9.1987ರ** ವರೆಗೆ ವಿಸ್ತರಿಸಲಾಗಿದೆ. ಹೆಚ್ಚಿನ ವಿವರಗಳನ್ನು ಕೈಗಾರಿಕಾ ವಿಸ್ತರಣಾಧಿಕಾರಿಗಳಿಂದ ಪಡೆಯಬಹುದು.

## ಸೂಚನೆ

(ನಮ್ಮ 6-9-1987 ರ ಸಂಚಿಕೆಯ ಪುಟ 3ರಲ್ಲಿರುವ ಏಲಕ್ಕಿ ಚಿಲೆ ಕೀಟ ಹತೋಟಿ ಬಗೆಗಿನ ಲೇಖನ ಬರೆದವರು : ಡಾ॥ ಎ.ಕೆ. ಚಕ್ರವರ್ತಿ, ಎ. ಎಸ್. ಶಿವಲಿಂಗೇಗೌಡ, ಡಾ॥ ಎಂ.ಎಂ ಖಾನ್, ಪ್ರಾದೇಶಿಕ ಸಂಶೋಧನಾ ಕೇಂದ್ರ, ಮೂಡಿಗೆರೆ; ಸೌಜನ್ಯ : 'ತೀರ್ಥಹಳ್ಳಿ ಗ್ರಾಮಭಾರತಿ'. —ಸಂ )



## ಕಿಗ್ಗ ಮಂಡಲ ಪ್ರಧಾನ ಪಟ್ಟ : ಒಡಂಬಡಿಕೆ

(1ನೇ ಪುಟದಿಂದ)

ವರ್ಷ ಯಾವ ರೀತಿ ಸಹಕಾರ ಕೊಡುತ್ತಾರೆಂಬುದರ ಮೇಲೆ ಮುಂದಿನ ಮಾತು"

ನಿಮಗೆ ಜನತಾದವರು ಬೆಂಬಲ ಕೊಟ್ಟು ನಿಮ್ಮನ್ನು ಜನತಾಕ್ಕೆ ಸೇರಿಸಿಕೊಂಡು ಮಂಡಲ ಪ್ರಧಾನರಾಗುವ ಅವಕಾಶ ಕೊಟ್ಟದ್ದಲ್ಲವೆ? ಈಗ ಕಾಂಗ್ರೆಸ್-ಅಂದರೆ ಅವರೇನನ್ನುತ್ತಾರೆ? –ಪ್ರಶ್ನೆ.

"ನಮಗೆ ಗ್ರಾಮದಲ್ಲಿ ಸಾಧ್ಯವಾದಷ್ಟು ಕೆಲಸಗಳಾಗಬೇಕು. ಅಷ್ಟೇ ಹೊರತು ಜನತಾವೋ ಕಾಂಗ್ರೆಸ್ಸೋ ಮುಖ್ಯವಲ್ಲ. ನಾನೀಗ ಮಂಡಲದ ಪ್ರಧಾನ ಅಷ್ಟೇ. ನಮಗೆ ಎಲ್ಲರ ಸಹಕಾರವೂ ಬೇಕು."

**ಪ್ರತಿಷ್ಠೆ ಬದಿಗಿಟ್ಟು**

ಇನ್ನಾದರೂ ರಾಜಕೀಯ ಪ್ರತಿಷ್ಠೆ ಬದಿಗಿಟ್ಟು, ಎರಡು ಕಡೆಯವರೂ ಗ್ರಾಮದ ಏಳ್ಗೆಗೆ ಗಮನ ಕೊಡುತ್ತಾರೋ.... ಕಾದು ನೋಡಬೇಕು.

### ಶಿವಮೊಗ್ಗ ಅಡಿಕೆ ಧಾರಣೆ

**ತಾ॥ 10.9.1987**

| | |
|---|---|
| ಸರಕು : | 4430 – 5301 |
| ಬೆಟ್ಟೆ : | 2321 – 3302 |
| ಗೊರಬಲು : | 814 – 1080 |

### ಸಾಗರ ಅಡಿಕೆ ತಾ॥ 8.9.1987

| | |
|---|---|
| ಇಡಿ ಅಡಿಕೆ ರೂ. | 2086–2261 |
| ಚಾಲಿ ರೂ. | 1380–1504 |
| ಸಿಪ್ಪೆ ಗೋಟು ರೂ. | 509–787 |
| ಆಪಿ ರೂ. | 3569 – 3916 |

### ಮಂಗಳೂರು ಅಡಿಕೆ ಧಾರಣೆ

**ದಿನಾಂಕ 10–9–1987**

| | |
|---|---|
| ಹಳೆಯದು ರೂ. | 1770–2150 |
| ಹೊಸದು ರೂ. | 1510–2022 |





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿ.ಮನೆ ನಾಗರಾಜ್, ಅಚ್ಚು: ಶ್ರೀ ಆಚಾರ್ಯ ಆಫ್‌ಸೆಟ್, ಕೊಪ್ಪ